# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1048
ಸದಸ್ಯರ ಹೆಸರು : ಶ್ರೀ ಕೆ.ಹರೀಶ್ ಕುಮಾರ್ (ವಿಧಾನಸಭೆಯಿಂದ ಚುನಾಯಿತರಾದವರು)
ಉತ್ತರಿಸುವ ದಿನಾಂಕ : 10.03.2021
ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| (ಅ) | ಉಡುಪಿ ಜಿಲ್ಲೆಯ ಕುಂದಾಪುರ ತಾಲ್ಲೂಕು ವಂಡ್ಸೆ ಹೋಬಳಿಯ ಕರ್ಕುಂಜೆ ಗ್ರಾಮ ವ್ಯಾಪ್ತಿಯ ಸರ್ಕಾರಿ ಸರ್ವೆ ನಂ.120 ರಲ್ಲಿ ಮಂಜೂರಾಗಿರುವ 2.96 ಎಕರೆ ಖಾತಾ ನಂ.1015 ರಲ್ಲಿನ ಜಾಗವು ಚಕ್ರ ನದಿಗೆ ಹೊಂದಿಕೊಂಡಿದ್ದು, ಇದು ನದಿ ದಂಡೆ ಅತಿಕ್ರಮಣ ವ್ಯಾಪ್ತಿಗೆ ಒಳಪಟ್ಟಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕುಂದಾಪುರ ತಾಲೂಕು ಕರ್ಕುಂಜೆ ಗ್ರಾಮದ ಸರ್ವೆ ನಂಬರ್ 120 ರಲ್ಲಿ 2.96 ಎಕರೆ ಜಮೀನು ಶ್ರೀಮತಿ ಜ್ಯೋತಿ ಶೆಡ್ತಿ ಕೋಂ ಶಂಕರ ಶೆಟ್ಟಿ ಇವರಿಗೆ ನಮೂನೆ 53 ರಂತೆ ಸಮಿತಿಯಿಂದ ಮಂಜೂರಾಗಿರುತ್ತದೆ. ಅದರಂತೆ ಸದರಿಯವರಿಗೆ ಪಹಣಿ ದಾಖಲಿಸಿ ಖಾತಾ ನಂಬರ್ 1015 ನೀಡಿರುವುದಾಗಿದೆ.<br><br>ಸದರಿಯವರಿಗೆ ಮಂಜೂರಾತಿಯಾದ ಜಮೀನು ಸರ್ಕಾರಿ ಪೋರಂಬೋಕು ಜಮೀನು ಆಗಿರುವುದು ಕಂದಾಯ ದಾಖಲೆಗಳ ಪರಿಶೀಲನೆಯಿಂದ ಕಂಡು ಬರುವುದಿಲ್ಲ. ಸದರಿ ಜಮೀನು ಸರ್ಕಾರಿ ಅನಾಧೀನ ಜಮೀನಾಗಿರುತ್ತದೆ. ಚಿತ್ತೂರು ಸರ್ವೆ ನಂಬರ್ 102/* ಸರ್ಕಾರಿ ಜಮೀನು ಆಗಿರುವುದು ಕಂದಾಯ ದಾಖಲೆಗಳ ಪರಿಶೀಲನೆಯಿಂದ ಕಂಡು ಬರುತ್ತದೆ. ಮಂಜೂರಾತಿ ಜಮೀನು ಮತ್ತು ಚಕ್ರಾ ನದಿ ನಡುವೆ ಸರ್ವೆ ನಂಬರ್ 102 ಆಗಿರುತ್ತದೆ. ಇವುಗಳ ನಡುವಿನ ಅಂತರ 30 ಮೀಟರ್ ಇರುವುದಾಗಿದೆ. ಸಿ.ಆರ್.ಝಡ್ ವ್ಯಾಪ್ತಿಯ ಜಮೀನು ಆಗಿರುವುದು ಕಂಡು ಬರುವುದಿಲ್ಲ ಮತ್ತು ನದಿ ಹಾದು ಹೋಗುವ ಸರ್ಕಾರಿ ಜಮೀನು ಚಿತ್ತೂರು ಗ್ರಾಮದ ಸರ್ವೆ ನಂಬರ್ ಆಗಿದ್ದು, ಮಂಜೂರಾತಿ ಜಮೀನು ಕರ್ಕುಂಜೆ ಗ್ರಾಮದ ಸರ್ವೆ ನಂಬರ್ ಆಗಿದ್ದು, ಇವುಗಳ ನಡುವಿನ ಸರ್ಕಾರಿ ಜಮೀನಿನಲ್ಲಿ ಒತ್ತುವರಿ ಆಗಿರುವುದು ಮೇಲ್ನೋಟಕ್ಕೆ ಕಂಡು ಬರುತ್ತದೆ. |
| (ಆ) | ಸದರಿ ಜಾಗದ ಮಂಜೂರಾತಿಗಾಗಿ ನಕಲಿ ದಾಖಲೆ ಸೃಷ್ಟಿಸಿ ಮಂಜೂರಾತಿ ಮಾಡಿಸಿಕೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ' | ಕರ್ನಾಟಕ ಭೂ ಕಂದಾಯ ಕಾಯ್ದೆ 1964 ಕಲಂ 94ಬಿ ರ ನಮೂನೆ 53 ರಲ್ಲಿ ಅರ್ಜಿ ಸಲ್ಲಿಸಿ ಸಮಿತಿಯಲ್ಲಿ ನಿಯಮಾನುಸಾರ ಕಡತ ತಯಾರಿಸಿ ಮಂಜೂರಾತಿಗೆ ಕ್ರಮವಾಗಿರುತ್ತದೆ. ಸದರಿ ಮಂಜೂರಾತಿಗೆ ಸಂಬಂಧಿಸಿದಂತೆ ನಕಲಿ ದಾಖಲೆ ಸೃಷ್ಟಿಸಿ ಮಂಜೂರಾತಿ ಪಡೆದಿರುವುದು ಕಂಡು ಬಂದಿರುವುದಿಲ್ಲ. |

.......................2

| | | |
|---|---|---|
| (ಇ) | ಸದರಿ ಜಾಗವನ್ನು ಭೂ ಕಂದಾಯ ಕಾಯ್ದೆ 1964ರ ಕಲಂ 192ಎ ರಂತೆ ಭೂ ಮಂಜೂರಾತಿ ಹಿಂಪಡೆಯಲು ಕ್ರಮ ಕೈಗೊಳ್ಳಲಾಗುವುದೇ; (ವಿವರ ಒದಗಿಸುವುದು) | ಮಂಜೂರಾತಿಯು ಕ್ರಮಬದ್ಧವಾಗಿರುವುದರಿಂದ ಭೂ ಮಂಜೂರಾತಿ ಹಿಂಪಡೆಯುವ ಕ್ರಮ ಸರ್ಕಾರದ ಮುಂದೆ ಇರುವುದಿಲ್ಲ. |
| (ಈ) | ಸರ್ವೆ ನಂ.120 ರಲ್ಲಿ 2.96 ಎಕರೆ Land Plotting ಸಂಬಂಧಿಸಿದಂತೆ ಸರ್ವೆ ಕಾರ್ಯ ನಡೆಸಲಾಗಿದೆಯೇ; ನಡೆಸಿದ್ದಲ್ಲಿ ಸರ್ವೆ ನಡೆಸಿದ ಅಧಿಕಾರಿಯ ವಿವರ ಸೇರಿದಂತೆ ಸಂಪೂರ್ಣ ನಡವಳಿಯ ಪ್ರತಿ ನೀಡುವುದು; | ಕುಂದಾಪುರ ತಾಲೂಕು ಕರ್ಕುಂಜೆ ಗ್ರಾಮ ಸರ್ವೆ ನಂಬರ್ 120 ರಲ್ಲಿ 2.96 ಎಕರೆ Land Plotting ಸಂಬಂಧಿಸಿದಂತೆ ಕಡತ ಸಂಖ್ಯೆ LND:CR 192/20-21 (ಏಕವ್ಯಕ್ತಿ ಆದೇಶದಂತೆ) ಮೇರೆಗೆ ಸರ್ಕಾರಿ ಭೂಮಾಪಕರಿಗೆ ಅಳತೆಗೆ ಸೂಚಿಸಿದ್ದು, ಅಳತೆ ಕಾರ್ಯ ಪ್ರಗತಿಯಲ್ಲಿ ಇರುತ್ತದೆ. |
| (ಉ) | ಸದರಿ Plotting 2.95 ಎಕರೆ ಸಂಬಂಧಿಸಿದಂತೆ ಕುಂದಾಪುರ ತಹಶೀಲ್ದಾರರಿಗೆ ಆಕ್ಷೇಪಣೆಗಳು ಸಲ್ಲಿಕೆಯಾಗಿದೆಯೇ; ಹಾಗಿದ್ದಲ್ಲಿ, ಈ ಕುರಿತಂತೆ ಕೈಗೊಂಡ ಕ್ರಮವೇನು? (ಸಂಪೂರ್ಣ ವಿವರ ನೀಡುವುದು) | ಪ್ಲಾಟಿಂಗ್ ಕಾರ್ಯಕ್ಕೆ ಸಂಬಂಧಿಸಿದಂತೆ, ತಹಶೀಲ್ದಾರ್, ಕುಂದಾಪುರ ಇವರ ಕಛೇರಿಯಲ್ಲಿ ಆಕ್ಷೇಪಣೆ ಸ್ವೀಕೃತಿಯಾಗಿದ್ದು, ಸದರಿ ಆಕ್ಷೇಪಣೆಯು ಭೂದಾಖಲೆಗಳ ಸಹಾಯಕ ನಿರ್ದೇಶಕರು ಕುಂದಾಪುರ ತಾಲೂಕು ಇವರ ಕಚೇರಿಯಲ್ಲಿ ವಿಚಾರಣೆಗೆ ಬಾಕಿ ಇರುತ್ತದೆ. |

**(ಕಡತ ಸಂಖ್ಯೆ:ಕಂಇ 26 ಎಲ್‌ಜಿಎ 2021)**

**(ಆರ್.ಅಶೋಕ)**
ಕಂದಾಯ ಸಚಿವರು